# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1279
ಸದಸ್ಯರ ಹೆಸರು : ಶ್ರೀ ಪ್ರಾಣೇಶ್ ಎಂ.ಕೆ.
ಉತ್ತರಿಸುವ ದಿನಾಂಕ : 26.02.2018
ಉತ್ತರಿಸುವ ಸಚಿವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯಾದ್ಯಂತ ಕಾರ್ಯನಿರ್ವಹಿಸುತ್ತಿರುವ 27 ಅಂಗವಿಕಲರ ಶಾಲೆಗಳ ಒಟ್ಟು 321 ಉದ್ಯೋಗಿಗಳಿಗೆ ನಿವೃತ್ತಿ ವೇತನ ಸೌಲಭ್ಯ ಮತ್ತು ಹೆಚ್.ಆರ್.ಎಂ.ಎಸ್. ಸೌಲಭ್ಯವನ್ನು ಒದಗಿಸಬೇಕೆಂದು ಸರ್ಕಾರದ ಆದೇಶವಿದ್ದರೂ ಸಹ ಏಕೆ ಕಾರ್ಯಗತವಾಗಿಲ್ಲ; (ವಿವರದೊಂದಿಗೆ ಸರ್ಕಾರಿ ಆದೇಶದ ಪ್ರತಿ ನೀಡುವುದು) | ಅ) ಹೆಚ್.ಆರ್.ಎಂ.ಎಸ್ ಸೌಲಭ್ಯವನ್ನು ಇಲಾಖಾ ವ್ಯಾಪ್ತಿಯೊಳಗೆ ಬರುವ ಎಲ್ಲ ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆ ಅಧಿಕಾರಿ/ಸಿಬ್ಬಂದಿಯವರಿಗೆ ಸಂಬಂಧಿಸಿದಂತೆ ಕಡ್ಡಾಯವಾಗಿ ಬಳಸಲು ಸರ್ಕಾರದ ಸೂಚನೆ ಇರುತ್ತದೆ.<br><br>ಆ) ಆದರೆ, ಹೆಚ್.ಆರ್.ಎಂ.ಎಸ್. ಪೋರ್ಟಲ್‌ನಲ್ಲಿ ಪ್ರತಿಯೊಂದೂ ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ಸಂಬಂಧಿಸಿದಂತೆ, ಸದರಿ ಹುದ್ದೆ ಆರ್ಥಿಕ ಇಲಾಖೆಯಿಂದ ಅನುಮೋದನೆಗೊಂಡು ಸರ್ಕಾರದಿಂದ ಮಂಜೂರಾಗಿರುವ ಬಗ್ಗೆ ಸರ್ಕಾರದ ಆದೇಶದ ವಿವರಗಳು ಹಾಗೂ ಸರ್ಕಾರದ ಆದೇಶದ ಪ್ರತಿಯನ್ನು ಅಪ್‌ಲೋಡ್ ಮಾಡಿದಲ್ಲಿ ಮಾತ್ರ ಹೆಚ್.ಆರ್.ಎಂ.ಎಸ್. ಪೋರ್ಟಲ್ ಅಂತಹ ಸಿಬ್ಬಂದಿಗೆ ಹೆಚ್.ಆರ್.ಎಂ.ಎಸ್.ಗೆ ಒಳಪಡಲು ಅಂಗೀಕರಿಸುತ್ತದೆ.<br><br>ಇ) ಈ ಇಲಾಖೆಯಡಿಯಲ್ಲಿ 1982 ಅನುದಾನ ಸಂಹಿತೆಯಡಿಯಲ್ಲಿ ಒಟ್ಟು 34 ಖಾಸಗಿ ಶಾಲೆಗಳು ಕರ್ತವ್ಯ ನಿರ್ವಹಿಸುತ್ತಿವೆ. ಇದರಲ್ಲಿ ಕೇವಲ 7 ಶಾಲೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಗಳು ಮಾತ್ರ ಆರ್ಥಿಕ ಇಲಾಖೆಯಿಂದ ಅನುಮೋದನೆಗೊಂಡು ಸರ್ಕಾರದ ಅನುಮೋದನೆ ಪಡೆದಿರುವ ಹುದ್ದೆಗಳಾಗಿರುತ್ತವೆ. ಈ ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಆರ್ಥಿಕ ಇಲಾಖೆಯಿಂದ ಅನುಮೋದನೆಗೊಂಡು ಸರ್ಕಾರದಿಂದ ಆದೇಶವಾಗಿರುವ ಪ್ರಕರಣಗಳಲ್ಲಿ, ಅಂತಹ ಹುದ್ದೆಗಳಿಗೆ ಹೆಚ್.ಆರ್.ಎಂ.ಎಸ್ ಗೆ ಅಳವಡಿಸುವ ಪ್ರಕ್ರಿಯೆ ಜಾರಿಯಲ್ಲಿದೆ.<br><br>ಈ) ಉಳಿದ 27 ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ಹುದ್ದೆಗಳಿಗೆ ಆರ್ಥಿಕ ಇಲಾಖೆಯ ಅನುಮೋದನೆಗೊಂಡಿರುವುದಿಲ್ಲ ಹಾಗೂ ಸರ್ಕಾರದಿಂದ ಆಡಳಿತಾತ್ಮಕ ಆದೇಶ / ಅನುಮತಿ ದೊರೆತಿರುವುದಿಲ್ಲ. ಹಾಗಾಗಿ .ಆರ್ಥಿಕ ಇಲಾಖೆಯ ಅನುಮೋದನೆ ಹಾಗೂ ಸರ್ಕಾರದ ಅನುಮತಿ ನೀಡುವವರೆಗೆ, ಹೆಚ್.ಆರ್.ಎಂ.ಎಸ್ ಪೋರ್ಟಲ್ ಇಂತಹ ಅಧಿಕಾರಿಗಳು ಹಾಗೂ ಸಿಬ್ಬಂದಿಗಳ ವಿವರಗಳನ್ನು ಅಂಗೀಕರಿಸುವುದಿಲ್ಲ. |

..2

| | | |
|---|---|---|
| | | ಉ) ಪ್ರಸ್ತಾವನೆ ಸ್ವೀಕೃತವಾಗಿದ್ದು, ಆರ್ಥಿಕ ಇಲಾಖೆ ಮತ್ತು ಸಮಾಜ ಕಲ್ಯಾಣ ಇಲಾಖೆಯ ಅಭಿಪ್ರಾಯ ಕೋರಲಾಗಿದೆ. |
| ಆ) | 27 ಅಂಗವಿಕಲರ ಶಾಲೆಗಳ ಒಟ್ಟು 321 ಉದ್ಯೋಗಿಗಳಿಗೆ ನಿವೃತ್ತಿ ವೇತನ ಸೌಲಭ್ಯ ಮತ್ತು ಹೆಚ್.ಆರ್.ಎಂ.ಎಸ್. ಸೌಲಭ್ಯವನ್ನು ಒದಗಿಸಲು ಉದ್ದೇಶ ಸರ್ಕಾರದ ಮುಂದೆ ಇದೆಯೇ; ಹಾಗಾದರೆ, ಯಾವಾಗ ನೀಡಲಾಗುವುದು: (ವಿವರ ನೀಡುವುದು) | ಆರ್ಥಿಕ ಇಲಾಖೆ ಮತ್ತು ಸಮಾಜ ಕಲ್ಯಾಣ ಇಲಾಖೆಯ ಅಭಿಪ್ರಾಯ ಕೋರಲಾಗಿದೆ. ಸದರಿ ಇಲಾಖೆಗಳು ನೀಡುವ ಅಭಿಪ್ರಾಯವನ್ನಾಧರಿಸಿ ಮುಂದಿನ ಕ್ರಮ ಕೈಗೊಳ್ಳಲಾಗುವುದು. |
| ಇ) | 27 ಶಾಲೆಗಳ ಸುಮಾರು 2000 ಅಂಗವಿಕಲ ಮಕ್ಕಳಿಗೆ ಕ್ಷೀರಭಾಗ್ಯ ಯೋಜನೆ ವಿಸ್ತಾರಗೊಂಡಿರದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಹಾಗಾದರೇ ಅಂಗವಿಕಲ ಮಕ್ಕಳಿಗೆ ಯಾವಾಗ ಕ್ಷೀರಭಾಗ್ಯ ಯೋಜನೆ ವಿಸ್ತರಿಸಲಾಗುವುದು: (ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ. ಇಡಿ 24 ಎಂಎಂಎಸ್ 2018 ದಿ. 27/10/2018ಲ್ಲಿ (ಶಿಕ್ಷಣ ಇಲಾಖೆ) 01ನೇ ನವೆಂಬರ್ 2018ರಿಂದ ಜಾರಿಗೆ ಬರುವಂತೆ ಈ ಇಲಾಖೆಯಿಂದ ಶಿಶುಕೇಂದ್ರೀಕೃತ ಯೋಜನೆಯಡಿ ಅನುದಾನಿತ ಸಂಸ್ಥೆಗಳ ಮೂಲಕ ನಡೆಸಲಾಗುತ್ತಿರುವ 128 ಹಾಗೂ ರಾಜ್ಯ ಅನುದಾನ ಸಂಹಿತೆ 1982ರಡಿ ಜಿಲ್ಲಾ ಪಂಚಾಯತ್‌ನ ಅನುದಾನದಲ್ಲಿ ಅನುದಾನಿತ ಸಂಸ್ಥೆಗಳಿಂದ ಕಾರ್ಯನಿರ್ವಹಿಸುತ್ತಿರುವ 27 ಹೀಗೆ ಒಟ್ಟು 155 ವಿಶೇಷ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳಿಗೆ ಕ್ಷೀರ ಭಾಗ್ಯ ಯೋಜನೆಯಡಿ ವಾರದಲ್ಲಿ 5 ದಿನಗಳ ಉಚಿತ ಹಾಲು ವಿತರಿಸಲು ಆದೇಶಿಸಲಾಗಿದೆ.<br>ಅದರಂತೆ ಈ ಇಲಾಖೆಯಿಂದ ಶಿಶುಕೇಂದ್ರೀಕೃತ ಯೋಜನೆಯಡಿ ಅನುದಾನಿತ ಸಂಸ್ಥೆಗಳ ಮೂಲಕ ನಡೆಸಲಾಗುತ್ತಿರುವ 128 ಹಾಗೂ 27 ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿಕಲಚೇತನ ಮಕ್ಕಳಿಗೂ ಸಹ ಈ ಯೋಜನೆಯನ್ನು ವಿಸ್ತರಿಸಲು ಅಗತ್ಯ ಕ್ರಮ ಕೈಗೊಳ್ಳಲು ಎಲ್ಲಾ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳಿಗೆ ಸೂಚಿಸಲಾಗಿದೆ.<br>ಪ್ರಸ್ತುತ ಕೊಪ್ಪಳ, ಶಿವಮೊಗ್ಗ, ತುಮಕೂರು, ಬೆಳಗಾವಿ ಹಾಗೂ ದಕ್ಷಿಣಕನ್ನಡ ಜಿಲ್ಲೆಗಳಲ್ಲಿ 1982ರ ರಾಜ್ಯ ಅನುದಾನ ಸಂಹಿತೆಯಡಿ ಕರ್ತವ್ಯ ನಿರ್ವಹಿಸುತ್ತಿರುವ ವಿಶೇಷ ಶಾಲೆಗಳಲ್ಲಿ ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ. ಉಳಿದ 22 ಶಾಲೆಗಳಲ್ಲಿಯೂ ಸಹ ಈ ಬಗ್ಗೆ ತುರ್ತು ಕ್ರಮಕೈಗೊಳ್ಳಲು ಇಲಾಖೆಯಿಂದ ದಿನಾಂಕ:07.02.2019ರಂದು ಜಂಟಿ ನಿರ್ದೇಶಕರು, ಮಧ್ಯಾಹ್ನ ಉಪಹಾರ ಯೋಜನೆ, ಬೆಂಗಳೂರು ರವರಿಗೆ ಪತ್ರ ಬರೆದು ಕೋರಲಾಗಿದೆ. ಈ ಯೋಜನೆಯು ಶಿಕ್ಷಣ ಇಲಾಖೆಯಿಂದ ಜಾರಿಗೊಳಿಸಲ್ಪಡುತ್ತಿದೆ. |

<table>
<tr>
<td>ಈ)</td>
<td>ಪ್ರಸ್ತುತ ಇಂತಹ ಶಾಲೆಗಳ ಸಾದಿಲ್ವಾರು ನಿರ್ವಹಣೆಗಾಗಿ ವಾರ್ಷಿಕ ಎಷ್ಟು ಅನುದಾನ ನೀಡಲಾಗುತ್ತಿದೆ; ಈ ಅನುದಾನವನ್ನು ಕನಿಷ್ಠ ಒಂದು ಲಕ್ಷಕ್ಕೆ ಏರಿಕೆ ಮಾಡುವ ಉದ್ದೇಶ ಸರ್ಕಾರದ ಮುಂದೆ ಇದೆಯೇ ಹಾಗಾದರೆ ಯಾವಾಗ ಏರಿಕೆ ಮಾಡಲಾಗುವುದು? (ವಿವರ ನೀಡುವುದು)</td>
<td>ರಾಜ್ಯ ಅನುದಾನ ಸಂಹಿತೆ 1982ರಡಿ ನಿಯಮ 22ರಂತೆ ಪ್ರಸ್ತುತ ಶಾಲೆಗಳಲ್ಲಿನ ಸಾದಿಲ್ವಾರು ನಿರ್ವಹಣೆಗಾಗಿ ಅನುದಾನವನ್ನು ನಿಯಮ 22ರಂತೆ ನೀಡಲಾಗುತ್ತಿದೆ.
<table>
<tr><th>Sl No.</th><th>Category</th><th>Item</th></tr>
<tr><td>1</td><td>Class-room furniture</td><td>Chair, Table, Almarah, Black board, Cabinet Amplifier in case of Deaf Institution, Teachers table and Chairs.</td></tr>
<tr><td>2</td><td>Office-furniture</td><td>Table & chair for clerical staff visitors stool, Almarah and file cabinet.</td></tr>
<tr><td>3</td><td>Stationery and Printing</td><td>50% of the expenditure limited to maximum of Rs.1000 per year.</td></tr>
<tr><td>4</td><td>Postage</td><td>50% expenditure subject to maximum of Rs.150/- per year.</td></tr>
<tr><td>5</td><td>Electricity</td><td>Rs.1000 for Deaf institution Rs.500 for other institutions</td></tr>
<tr><td>6</td><td>General Expenditure including broad items</td><td>50% expenditure subject to a limitation of RS.1000 per year</td></tr>
<tr><td>7</td><td>Crafts and Library</td><td>50% of the expenditure subject to a limitation of Rs.1000 per year</td></tr>
<tr><td>8</td><td>Maintenance of building</td><td>50% of the expenditure, subject to a maximum of 1500/- per year if it is having own buildings</td></tr>
<tr><td>9</td><td>Books</td><td>To provide books worth Rs.500 per annum.</td></tr>
<tr><td>10</td><td>Rent of building</td><td>50% of actual rent paid subject to the maximum of 1000 per year</td></tr>
<tr><td>11</td><td>Special equipments depending upon each institution.</td><td>As certified by the specialist and as required by the head of the institutions depending on the need and type of institution,</td></tr>
<tr><td>12</td><td>Petroal Diesel and Oil</td><td>50% of the expenditure upto a maximum of Rs.2400 per annum</td></tr>
</table>
ಅನುದಾನವನ್ನು ಒಂದು ಲಕ್ಷಕ್ಕೆ ಏರಿಕೆ ಮಾಡುವ ಉದ್ದೇಶ ಸರ್ಕಾರದ ಮುಂದೆ ಸದ್ಯ ಇರುವುದಿಲ್ಲ.</td>
</tr>
</table>

**ಸಂಖ್ಯೆ: ಮಮಇ 51 ಪಿಹೆಚ್‌ಪಿ 2018**

(ಡಾ॥ ಜಯಮಾಲ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ,
ವಿಕಲಚೇತನರ, ಹಿರಿಯ ನಾಗರೀಕರ ಸಬಲೀಕರಣ
ಇಲಾಖಾ ಸಚಿವರು